# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 427
2. ಮಾನ್ಯ ವಿಧಾನ ಪರಿಷತ್ತು ಸದಸ್ಯರ ಹೆಸರು : ಶ್ರೀ ಆರ್.ಬಿ.ತಿಮ್ಮಾಪುರ (ವಿಧಾನ ಸಭೆಯಿಂದ ಚುನಾಯಿತರಾದವರು)
3. ಉತ್ತರಿಸುವ ದಿನಾಂಕ : 04.02.2021
4. ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಮಾದಕದ್ರವ್ಯ ಬಳಕೆ ಮತ್ತು ಸೇವನೆಯ ಪ್ರಕರಣಗಳು ದಿನೇ ದಿನೇ ಹೆಚ್ಚಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ | ಡ್ರಗ್ಸ್ ನಿಯಂತ್ರಣ ಕಾಯಿದೆಯಡಿ ಈವರೆಗೆ ಕ್ರಮ ಕೈಗೊಳ್ಳಲಾದ ಪ್ರಕರಣಗಳ ಸಂಖ್ಯೆ ಎಷ್ಟು; | ರಾಜ್ಯದಲ್ಲಿ ಮಾದಕ ವಸ್ತುಗಳ ಸೇವನೆ, ಮಾರಾಟ, ಸಾಗಾಣೆಯ ವಿರುದ್ಧ ಎನ್.ಡಿ.ಪಿ.ಎಸ್. ಕಾಯ್ದೆ ಅಡಿಯಲ್ಲಿ ಕಳೆದ ಮೂರು ವರ್ಷಗಳಲ್ಲಿ ದಾಖಲಿಸಿರುವ ಪ್ರಕರಣಗಳ ಸಂಖ್ಯೆ ಈ ಕೆಳಕಂಡಂತಿದೆ.<br>ವರ್ಷ — ಎನ್.ಡಿ.ಪಿ.ಎಸ್. ಕಾಯ್ದೆಯಡಿಯಲ್ಲಿ ದಾಖಲಿಸಿರುವ ಪ್ರಕರಣಗಳ ಸಂಖ್ಯೆ<br>2018 — 1031<br>2019 — 1661<br>2020 — 4066 |
| ಇ | ಡ್ರಗ್ಸ್ ಮಾರಾಟ ಮತ್ತು ನಿಯಂತ್ರಣಕ್ಕೆ ಕಡಿವಾಣ ತರಲು ಕಟ್ಟುನಿಟ್ಟಿನ ಕ್ರಮ ಕೈಗೊಳ್ಳಲು ಸರ್ಕಾರ ಮುಂದಾಗುವುದೇ? | ರಾಜ್ಯದಲ್ಲಿ ಮಾದಕ ವಸ್ತುಗಳ ಸೇವನೆಯನ್ನು ನಿಯಂತ್ರಿಸಲು ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.<br>1. ಮಾದಕ ದ್ರವ್ಯದ ಸೇವನೆಯಿಂದ ಆಗುವ ದುಷ್ಪರಿಣಾಮಗಳ ಬಗ್ಗೆ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರಿಗೆ ಕಾಲೇಜುಗಳಲ್ಲಿ ಜಾಗೃತಿ ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.<br>2. ಮಾದಕ ದ್ರವ್ಯಗಳ ಮಾರಾಟ ತಡೆಗಟ್ಟುವ ಬಗ್ಗೆ ಠಾಣಾ ಮಟ್ಟದಲ್ಲಿ ಗೌಪ್ಯ ಮಾಹಿತಿಯನ್ನು ಸಂಗ್ರಹಿಸಲಾಗುತ್ತಿದೆ. ಶಾಲಾ ಕಾಲೇಜುಗಳಿಗೆ ಭೇಟಿ ನೀಡಿ ಅಕ್ಕ-ಪಕ್ಕಪಿರುವ |

| | | |
|---|---|---|
| | | ಅಂಗಡಿ ಮುಂಗಟ್ಟುಗಳಲ್ಲಿ ಮಾದಕ ದ್ರವ್ಯ ಮಾರಾಟವಾಗುತ್ತಿರುವ ಬಗ್ಗೆ ಗುಪ್ತವಾಗಿ ಮಾಹಿತಿಯನ್ನು ಕಲೆಹಾಕಿ ಕ್ರಮ ಕೈಗೊಳ್ಳಲಾಗುತ್ತಿದೆ.<br>3. ಮಾದಕ ದ್ರವ್ಯ (ಡ್ರಗ್ಸ್) ಹಾವಳಿಯನ್ನು ತಡೆಗಟ್ಟಲು ಸೂಕ್ತ ನಿಗಾವಹಿಸಿ ಮಾದಕ ದ್ರವ್ಯಗಳ ಮಾರಾಟ ಮತ್ತು ಸೇವಿಸುವವರ ಬಗ್ಗೆ ಮಾಹಿತಿ ಸಂಗ್ರಹಿಸಲಾಗುತ್ತಿದೆ ಹಾಗೂ ಡ್ರಗ್ಸ್ ನಿಯಂತ್ರಣಕ್ಕೆ ಸಾರ್ವಜನಿಕ ಸಹಭಾಗಿತ್ವ ಪಡೆಯಲು ಸಾರ್ವಜನಿಕರು ಡ್ರಗ್ಸ್ ಅಕ್ರಮಗಳ ಬಗ್ಗೆ ರಹಸ್ಯ ಮಾಹಿತಿಗಳನ್ನು ನೀಡಲು ಶುಲ್ಕ ರಹಿತ ದೂರವಾಣಿ ಸಂಖ್ಯೆ 1908ಅನ್ನು ಪ್ರಾರಂಭಿಸಲಾಗಿದೆ. ಇದರಿಂದ ಸಾರ್ವಜನಿಕರು ಮುಕ್ತವಾಗಿ ಡ್ರಗ್ಸ್ ಸರಬರಾಜು, ಮಾರಾಟ, ಬಳಕೆಗಳ ಕುರಿತು ಪೊಲೀಸರಿಗೆ ಹೆಚ್ಚು ಹೆಚ್ಚು ಮಾಹಿತಿಗಳನ್ನು ನೀಡುವುದಕ್ಕೆ ಅವಕಾಶವಾಗಿರುತ್ತದೆ.<br>4. ಸಾಮಾಜಿಕ ಜಾಲತಾಣಗಳಲ್ಲಿ ಚುಟುಕು ವಿಡಿಯೋಗಳ ಮೂಲಕ ಮಾದಕ ವಸ್ತುಗಳ ದುಷ್ಪರಿಣಾಮಗಳ ಬಗ್ಗೆ ಅರಿವು ಮೂಡಿಸಲಾಗುತ್ತಿದೆ.<br>5. ಈ ಹಿಂದೆ ಡ್ರಗ್ಸ್ ಅಪರಾಧಗಳಲ್ಲಿ ಭಾಗಿಯಾಗಿರುವ ರೂಢೀಕೃತ ಆಸಾಮಿಗಳ ಚಟುವಟಿಕೆಗಳ ಮೇಲೆ ತೀವ್ರ ನಿಗಾವಣೆಯಲ್ಲಿಡಲಾಗಿದೆ. ಜೊತೆಗೆ ಅಂತರಾಜ್ಯ ಡ್ರಗ್ಸ್ ಆರೋಪಿಗಳ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿ ಅವರ ಮೇಲೆ ನಿಗಾ ಇಡಲಾಗಿದೆ.<br>6. ಬೆಂಗಳೂರು ನಗರ ಪೊಲೀಸರು ಪ್ರಥಮ ಬಾರಿಗೆ ಅಂತರ್ಜಾಲ (Dark Web) ಮುಖಾಂತರ ನೆದರ್‌ಲೆಂಡ್, ಕೆನಡಾ ಮುಂತಾದ ವಿದೇಶಗಳಿಂದ ಹಲವು ಮಾದರಿಯ ಡ್ರಗ್ಸ್‌ಗಳನ್ನು ಕೊರಿಯರ್/ ರಿಜಿಸ್ಟರ್ಡ್ ಅಂಚೆ ಮುಖಾಂತರ ನಗರಕ್ಕೆ ತರಿಸುತ್ತಿದ್ದ ಡ್ರಗ್ಸ್‌ಜಾಲವನ್ನು ಪತ್ತೆ ಮಾಡಿ, ಅಪಾರ ಪ್ರಮಾಣದ ವಿವಿಧ ಡ್ರಗ್ಸ್‌ಗಳನ್ನು ಅಮಾನತ್ತುಪಡಿಸಿ ಕೊಂಡಿರುತ್ತಾರೆ.<br>7. ವಿದೇಶಗಳಿಂದ ಪ್ರವಾಸಿ, ಶೈಕ್ಷಣಿಕ ವೀಸಾಗಳಲ್ಲಿ ಬರುವ ಕೆಲವು ವ್ಯಕ್ತಿಗಳಲ್ಲಿ ಡ್ರಗ್ಸ್ ಮಾರಾಟದಲ್ಲಿ ತೊಡಗಿದ್ದ ವಿದೇಶಿ ಪ್ರಜೆಯನ್ನು Prevention of Illicit Traffic in Narcotic Drugs Psychotropic Substances Act, 1988 (PITNDPS) ಕಾಯಿದೆಯ ಅಡಿಯಲ್ಲಿ ಬಂಧನ ಆಜ್ಞೆಯನ್ನು ಹೊರಡಿಸಲಾಗಿದ್ದು, ಇದು |

| | | |
|---|---|---|
| | | ಕರ್ನಾಟಕ ರಾಜ್ಯದಲ್ಲಿ PITNDPS-1988 ಕಾಯಿದೆ ಅಡಿಯಲ್ಲಿ ಬಂಧನ ಆದೇಶ ಜಾರಿಗೊಳಿಸಿದ ಪ್ರಥಮ ಪ್ರಕರಣವಾಗಿದ್ದು, ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯದ ಸಲಹಾ ಮಂಡಳಿಯು ವಿದೇಶಿ ವ್ಯಕ್ತಿಯ ಬಂಧನದ ಆದೇಶವನ್ನು ಪುರಸ್ಕರಿಸಿರುತ್ತದೆ.<br>8. ವಿದೇಶಿಯರು ವಾಸಿಸುತ್ತಿರುವ ಪ್ರದೇಶಗಳು, ಮತ್ತು ಕೊಳಚೆ ಪ್ರದೇಶಗಳಲ್ಲಿ ಸಾರ್ವಜನಿಕ ಸಭೆ, ಮೆರವಣಿಗೆಗಳನ್ನು ನಡೆಸುವುದರ ಮೂಲಕ ವ್ಯಾಪಕ ಪ್ರಚಾರ ಕೈಗೊಳ್ಳಲು ಹಾಗೂ ಸಾರ್ವಜನಿಕರಲ್ಲಿ ಮಾದಕ ವಸ್ತುಗಳ ಸೇವನೆ ವಿರುದ್ಧ ಜಾಗೃತಿ ಮೂಡಿಸಲು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.<br>9. ಮಾದಕ ದ್ರವ್ಯದ ಸೇವನೆಯಿಂದ ಆಗುವ ದುಷ್ಪರಿಣಾಮಗಳ ಬಗ್ಗೆ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರಿಗೆ ಶಾಲಾ–ಕಾಲೇಜುಗಳಲ್ಲಿ ಮಾದಕ ದ್ರವ್ಯಗಳ ಬಗ್ಗೆ ವಿದ್ಯಾರ್ಥಿಗಳಲ್ಲಿ ಅರಿವು ಮೂಡಿಸಲು ಕಾರ್ಯಕ್ರಮಗಳನ್ನು ಆಯೋಜಿಸಿಲಾಗುತ್ತಿದೆ. ಶಾಲಾ ಕಾಲೇಜುಗಳಿಗೆ ಭೇಟಿ ನೀಡಿ ವಿದ್ಯಾರ್ಥಿಗಳಿಗೆ ಮಾದಕ ವಸ್ತುಗಳ ಸೇವನೆಯಿಂದ ಆಗುವ ದುಷ್ಪರಿಣಾಮಗಳ ಬಗ್ಗೆ ಉಪನ್ಯಾಸದ ಮೂಲಕ ವಿವರವಾಗಿ ತಿಳುವಳಿಕೆ ನೀಡಲಾಗುತ್ತಿದೆ.<br>10. ಠಾಣಾ ಸರಹದ್ದಿನ ಬೀಟ್ ಮತ್ತು ಸಬ್–ಬೀಟ್‌ಗಳಲ್ಲಿ ಆಗ್ಗಿಂದಾಗ್ಗೆ ಸಭೆಯನ್ನು ನಡೆಸಿ ಸಾರ್ವಜನಿಕರಲ್ಲಿ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.<br>11. ವಿದ್ಯಾರ್ಥಿಗಳು ಮತ್ತು ಯುವ ಸಮೂಹವು ಮಾದಕ ವಸ್ತುಗಳ ದುಶ್ಚಟಕ್ಕೆ ಬಲಿಯಾಗದಂತೆ ಶಾಲಾ ಕಾಲೇಜುಗಳ ಬಳಿ ಗಸ್ತು ವಾಹನಗಳಿಂದ ವಿಶೇಷವಾಗಿ ಗಸ್ತು ನಡೆಸಿ ಸ್ಥಳೀಯ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳು ಆಯಾ ಶಾಖೆಗಳಿಗೆ ಹೋಗಿ ಮಾದಕ ವಸ್ತು ಸಾಗಣೆ ಹಾಗೂ ಮಾರಾಟ ಮಾಡುವವರ ವಿರುದ್ಧ ನಿಗಾ ವಹಿಸಲಾಗುತ್ತಿದೆ.<br>12. ಜನ ಸಾಮಾನ್ಯರಲ್ಲಿ ಮಾದಕ ವಸ್ತುಗಳ ವಿರುದ್ಧ ಅರಿವು ಮೂಡಿಸುವ ಸಲುವಾಗಿ ಭಿತ್ತಿ ಪತ್ರಗಳನ್ನು, ಸಿನಿಮಾ ಮಂದಿರಗಳಲ್ಲಿ ಸ್ಲೈಡ್ ಶೋ, ಸುದ್ದಿ ಮಾಧ್ಯಮಗಳಲ್ಲಿ ಮಾದಕ ವಸ್ತುಗಳ ಬಳಕೆ ವಿರುದ್ಧ ಸಂದೇಶಗಳನ್ನು ಪ್ರಕಟಿಸುವುದು, ಹೀಗೆ ಜನಸಾಮಾನ್ಯರಲ್ಲಿ ಅರಿವು ಮೂಡಿಸಲಾಗುತ್ತಿದೆ. |

| | | |
|---|---|---|
| | | 13. ವಿಶ್ವ ಸಂಸ್ಥೆಯ ನಿರ್ದೇಶನದನ್ವಯ ಪ್ರತಿ ವರ್ಷ ಆಗಸ್ಟ್ ಮತ್ತು ಸೆಪ್ಟೆಂಬರ್ ಮಾಹೆಯಲ್ಲಿ ಮಾದಕ ವಸ್ತುಗಳ ಮಾರಾಟ ಮತ್ತು ಸಾಗಣೆಯನ್ನು ತಡೆಗಟ್ಟಲು ರಾಜ್ಯಾದ್ಯಂತ ವಿಶೇಷ ಕಾರ್ಯಾಚರಣೆ ಕೈಗೊಳ್ಳಲಾಗುತ್ತಿದೆ. ಈ ಅವಧಿಯಲ್ಲಿ ಶಾಲಾ ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ಮಾದಕ ವಸ್ತುಗಳ ಸೇವನೆಯಿಂದಾಗುವ ದೈಹಿಕ/ಆರ್ಥಿಕ/ಸಾಮಾಜಿಕ ದುಷ್ಪರಿಣಾಮಗಳ ಕುರಿತು ವಿಶೇಷ ಜಾಗೃತಿ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತಿದೆ. |

ಒಇ 02 ಪಿಎನ್‌ಡಿ 2021

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು